

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1530 (1754)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಬಿ.ಎಂ.ಫಾರೂಖ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ಸರ್ಕಾರಿ ಮತ್ತು ಅನುದಾನಿತ ಉರ್ದು ಶಾಲೆಗಳಲ್ಲಿ ಕನ್ನಡ ಶಿಕ್ಷಕರ ಹುದ್ದೆಗಳ ಬಗ್ಗೆ

(ಅ) ರಾಜ್ಯದಲ್ಲಿ ಸರ್ಕಾರಿ ಮತ್ತು ಅನುದಾನಿತ ಉರ್ದು ಶಾಲೆಗಳ ಸಂಖ್ಯೆ ಎಷ್ಟು; ಕಳೆದ ಮೂರು ವರ್ಷದಿಂದ ಈ ಶಾಲೆಗಳಿಗೆ ನೀಡಿರುವ ಅನುದಾನವೆಷ್ಟು;

(ಆ) ಸರ್ಕಾರಿ ಮತ್ತು ಅನುದಾನಿತ ಉರ್ದು ಶಾಲೆಗಳಲ್ಲಿ ಎಷ್ಟು ಕನ್ನಡ ಉಪನ್ಯಾಸಕರ ಹುದ್ದೆಗಳು ಖಾಲಿ ಇವೆ; ಖಾಲಿ ಹುದ್ದೆಗಳನ್ನು ಭರ್ತಿ ಮಾಡದಿರುವ ಬಗ್ಗೆ ಸ್ಪಷ್ಟನೆ ನೀಡುವುದು;

(ಇ) ಪ್ರತಿಭಾ ಕಾರಂಜಿ ಕಾರ್ಯಕ್ರಮವನ್ನು ಮೊದಲು ಎಲ್ಲಾ ಶಾಲೆಗಳು ಒಗ್ಗೂಡಿ ನಡೆಸುತ್ತಿದ್ದು, ಇತ್ತೀಚೆಗೆ ಉರ್ದು ಶಾಲೆಗಳು ಪ್ರತ್ಯೇಕವಾಗಿ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಶೋಚನೀಯ ಹಾಗೂ ಈ ರೀತಿಯ ವಿಭಜನೆ ಆಗಿರುವುದಕ್ಕೆ ಕಾರಣಗಳೇನು; ಈ ಬಗ್ಗೆ ಸರ್ಕಾರ ಮುಂದೆ ಒಟ್ಟಿಗೆ ನಡೆಸುವ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದೇ? (ಈ ಬಗ್ಗೆ ವಿವರಣೆ ನೀಡುವುದು)